

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 857 (928)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ವಿಷಯ : ನೇಕಾರರ ಸಾಲ ಮನ್ನಾ ಬಗ್ಗೆ

(ಅ) ದಿನಾಂಕ:31-03-2019ಕ್ಕೆ ಅಂತ್ಯಗೊಳ್ಳುವಂತೆ ವಿವಿಧ ಸಹಕಾರಿ ಸಂಘಗಳಿಂದ ನೇಕಾರರು ಮಾಡಿರುವ ಸಾಲವನ್ನು ಮನ್ನಾ ಮಾಡಲಾಗಿದೆಯೇ; ಎಷ್ಟು ಮೊತ್ತದ ಮಿತಿಗೆ ಒಳಪಟ್ಟಂತೆ ಸಾಲ ಮನ್ನಾ ಮಾಡಲಾಗಿದೆ ;

(ಆ) ಇದುವರೆಗೆ ಎಷ್ಟು ಜನ ನೇಕಾರರು ಈ ಸಾಲ ಮನ್ನಾಕ್ಕಾಗಿ ಅರ್ಜಿ ಸಲ್ಲಿಸಿರುತ್ತಾರೆ ; ಎಷ್ಟು ನೇಕಾರರಿಗೆ ಸಾಲ ಮನ್ನಾ ಮಾಡಲಾಗಿದೆ; ಮನ್ನಾ ಮಾಡಲಾಗಿರುವ ಸಾಲದ ಒಟ್ಟು ಮೊತ್ತ ಎಷ್ಟು ;

(ಇ) ನೇಕಾರರಿಗೆ ವಿವಿಧ ಕಾರಣಗಳಿಗಾಗಿ ಸಾಲ ಮನ್ನಾ ಆಗದೇ, ಹೊಸ ಸಾಲ ದೊರೆಯದೇ ತೊಂದರೆ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಸಂಘಟಿತ ಮತ್ತು ಅಸಂಘಟಿತ ನೇಕಾರರಿಗೆ ನೇಕಾರ ಪ್ರಮಾಣ ಪತ್ರ ನೀಡಲಾಗುತ್ತಿದೆಯೇ; ಯಾವ ಇಲಾಖೆ ಅಥವಾ ಸಂಸ್ಥೆಯಿಂದ ಈ ಪ್ರಮಾಣ ಪತ್ರ ನೀಡಲಾಗುತ್ತಿದೆ; ನೇಕಾರ ಪ್ರಮಾಣ ಪತ್ರ ದೊರೆಯದೇ ನೇಕಾರರಿಗೆ ತೊಂದರೆ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ?